# ಭಾಷೆಯ ಬೆಳವಣಿಗೆ

ಭಾಷೆಯು ಹೇಗೆ ಬೆಳವಣಿಗೆಯಾಗಿದೆ ಅಥವಾ ಯಾವ ರೀತಿಯಲ್ಲಿ ಬದಲಾವಣೆ ಹೊಂದಿದೆ ಎಂಬುದು ಒಂದು ಮಹತ್ವಪೂರ್ಣ ಪ್ರಶ್ನೆಯಾಗಿದೆ. ಈ ಲೇಖನವು ಈ ಪ್ರಶ್ನೆಯ ಆರಂಭಿಕ ಸ್ತರಗಳನ್ನು ತೆರೆದಿಡಲಿದೆ. ಇದು ಭಾಷೆಯ ಬದಲಾವಣೆಯು ಇಲ್ಲವೇ ಬೆಳವಣಿಗೆಯು ಮನುಷ್ಯನ ಸುಸಂಘಟಿತ, ಸಾಂಸ್ಕೃತಿಕ ಅಥವಾ ಸಾಮಾಜಿಕ ಬದಲಾವಣೆಗ*ಳೊಂದಿಗೆ ಹೊಂದಿರುವ ಸಂಬಂಧದ* ಹರವುಗಳನ್ನು ಪ್ರಸ್ತುತಪಡಿಸುತ್ತದೆ ಹಾಗೂ ಭಾಷೆಯಲ್ಲಿ ಸಾಂಸ್ಕೃತಿಕ ರೀತಿ-ನೀತಿಗಳು, ಇತಿಹಾಸ ಅಥವಾ ಸಾಂಸ್ಕೃತಿಕ ಶ್ರೇಣೀಕರಣದ ಇಣುಕುನೋಟವು ಹೇಗೆ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಕೂಡ ವಿವರಿಸುತ್ತದೆ. ಇದು ಭಾಷೆಯ ಬೆಳವಣಿಗೆಯನ್ನು ಮಾನವನ ಸಾಮಾಜೀಕರಣದ ಅವಶ್ಯಕತೆಯ ಪರಿಧಿಯೊಳಗೆ ಇರಿಸುತ್ತದೆ ಹಾಗೂ ಅದನ್ನೇ ಮಾನವ ಭಾಷೆಯ ಬೆಳವಣಿಗೆಯ ಆಧಾರವಾಗಿ ಪರಿಗಣಿಸಿರುವುದಾಗಿ ತೋರುತ್ತದೆ.

***

ಭಾಷೆಯ ಬದಲಾವಣೆಯ ಕುರಿತು ಅಧ್ಯಯನ ಮಾಡುವಾಗ ಅದರ ನಿಯಮಾವಳಿಯಲ್ಲಿ ಆಗಿರುವ ಬದಲಾವಣೆಗಳ ಬಗ್ಗೆ ನಾವು ಗಮನಹರಿಸುತ್ತೇವೆ, ನಿಜ, ಆದರೆ ಆ ಬದಲಾವಣೆಗೆ ಸಂಬಂಧಿಸಿದ ಬಹಳಷ್ಟು ಅಂಶಗಳನ್ನು ಮರೆತುಬಿಟ್ಟಿರುತ್ತೇವೆ. ಈ ಅಂಶವು ಭಾಷೆಯನ್ನು ಮಾತನಾಡುವ ಸಮುದಾಯದ ಐತಿಹಾಸಿಕ ಸಂದರ್ಭಗಳಿಗೆ ಅಥವಾ ಅವರ ಸಮಾಜದ ಸಂವಹನದ ಅವಶ್ಯಕತೆಗಳೊಂದಿಗೆ ಕೂಡ ಸೇರಿಕೊಂಡಿರುತ್ತದೆ. ಬೇರೆ ಬೇರೆ ಸಾಮಾಜಿಕ ಪರಿಸರದಲ್ಲಿ, ವಿಭಿನ್ನವಾದ ಭಾಷೆಗಳು ಕಂಡುಬರುವುದರಿಂದ ಸಾಮಾಜಿಕ ಪರಿಸರದ ಪ್ರಭಾವವು ಸ್ಪಷ್ಟವಾಗಿಯೇ ಗೋಚರಿಸುತ್ತದೆ. ಭಾಷೆಯ ಸ್ವರೂಪ ಮತ್ತು ಅದರ ಬೆಳವಣಿಗೆಯೊಂದಿಗೆ ಈ ಎಲ್ಲ ವಿಚಾರಗಳು ಸಂಬಂಧವನ್ನು ಹೊಂದಿವೆ. ಭಾಷೆಯ ಬೆಳವಣಿಗೆ ಅಥವಾ ಸ್ವರೂಪವು ಎಂಥ ವಿಷಯವೆಂದರೆ, ಅದು ಭಾಷೆಯನ್ನು ಮಾತ್ರವಲ್ಲ, ಮಾನವನ ಬೆಳವಣಿಗೆ ಮತ್ತು ಮನುಷ್ಯ ಸ್ವಭಾವದ ಅಂಶಗಳನ್ನು ಕೂಡ ಆಳವಾಗಿ ಸ್ಪರ್ಶಿಸುತ್ತದೆ.

ನಮ್ಮ ದೈನಂದಿನ ಜೀವನ ಪ್ರತಿಯೊಂದು ಬಗೆಯ ಸಂವಹನದಲ್ಲಿಯೂ ನಾವು ಭಾಷೆಯನ್ನು ಉಪಯೋಗಿಸುತ್ತೇವೆ. ಅದಕ್ಕಾಗಿ ಮನುಷ್ಯನು ಅದೆಷ್ಟೋ ಭಾಷೆಗಳನ್ನು ಬಳಕೆ ಮಾಡುವುದನ್ನು ತಿಳಿಯಬಹುದಾಗಿದೆ. ಸಾಮಾನ್ಯವಾಗಿ ಭಾಷೆಯ ಬಗ್ಗೆ ಬಹಳ ಆಳವಾಗಿ ಯೋಚನೆ ಮಾಡಲಾಗುವುದಿಲ್ಲ. ಭಾಷೆಯನ್ನು ಬಹುತೇಕ ಪದಗಳ ವ್ಯವಸ್ಥಿತ ನಿಯಮಗಳ (ಇದನ್ನು ವ್ಯಾಕರಣ ಎಂದು ಕರೆಯಲಾಗುತ್ತದೆ) ಮೂಲಕ ವ್ಯಕ್ತ ಮಾಡಲಾಗುತ್ತದೆ ಅಥವಾ ನಿಗದಿತ ಲಿಪಿ ಬಳಸಿ ಬರೆಯುವ ತನಕವಷ್ಟೇ ನೋಡಲಾಗುತ್ತದೆ. ಆದರೆ ಭಾಷೆಗೆ ಇನ್ನೂ ಅನೇಕ ದೃಷ್ಟಿಕೋನಗಳಿವೆ. ಉದಾಹರಣೆಗೆ, ಪ್ರತಿಯೊಂದು ಭಾಷೆಯೂ ಕೂಡ ಅದು ಯಾವ ಸಾಮಾಜಿಕ ಪರಿಸ್ಥಿತಿಯಲ್ಲಿ ಬೆಳವಣಿಗೆ ಆಗಿದೆಯೋ ಅದರ ಇಣುಕುನೋಟವು ಆಯಾ ಭಾಷೆಯಲ್ಲಿ ಕಾಣಸಿಗುತ್ತದೆ. ಜೊತೆಗೆ ಅದರಲ್ಲಿ ಆ ಸಮಾಜದ ಸಂಸ್ಕೃತಿ, ರೀತಿನೀತಿ ಅಥವಾ ಇತಿಹಾಸದ ಇಣುಕುನೋಟವು ಕೂಡ ಕಾಣಸಿಗುತ್ತದೆ. ಇದೆಲ್ಲದರ ಹೊರತಾಗಿಯೂ ಕೂಡ ಭಾಷೆಯ ಅಧ್ಯಯನದಿಂದ ಆ ಭಾಷೆಯ ಬೆಳವಣಿಗೆಯ ಇತಿಹಾಸವೂ ಸಹ ಮುನ್ನೆಲೆಗೆ ಬರುತ್ತದೆ. ಯಾವುದೇ ಭಾಷೆಯನ್ನು ನೆಲೆಗೊಳಿಸಿದ ಜನಸಮುದಾಯ ಯಾವುದು ಹಾಗೂ ಅವರು ಯಾವ ಆರ್ಥಿಕ-ಸಾಮಾಜಿಕ ಸಮೂಹವನ್ನು ಪ್ರತಿನಿಧಿಸುತ್ತಾರೆ ಎಂಬುದು ಕೂಡ ಅದರ ಅಧ್ಯಯನದಿಂದ ಹೊರಹೊಮ್ಮುತ್ತದೆ. ಭಾಷೆಯ ಪದಕೋಶದಲ್ಲಿ ಈ ರೀತಿಯ ಅನೇಕ ಸ್ಪಷ್ಟ ಉದಾಹರಣೆಗಳು ಲಭ್ಯವಿರುತ್ತವೆ. ಕೇವಲ ಈ ವಿಷಯವನ್ನು ಸ್ಪಷ್ಟಪಡಿಸುವ ಸಲುವಾಗಿ ಇವುಗಳ ಪೈಕಿ ಒಂದು ಉದಾಹರಣೆಯನ್ನು ನಾವಿಲ್ಲಿ ನೀಡುತ್ತಿದ್ದೇವೆ. ಬಹುಶಃ ಹಿಂದೂಸ್ಥಾನಿ ಎನ್ನಬಹುದಾದ ಆಡುಮಾತಿನ ಭಾಷೆಯಲ್ಲಿ 'ಕಮೀನಾ' ಎಂಬುದನ್ನು ಬೈಗುಳದ ರೂಪದಲ್ಲಿ ಉಪಯೋಗ ಮಾಡಲಾಗುತ್ತದೆ. 'ಕಾಮೀನ್'ಎಂಬ ಹೆಸರಿನಿಂದ ಪರಿಚಿತವಾಗಿರುವ ಕೃಷಿ ಕಾರ್ಮಿಕರ ಒಂದು ಜಾತಿಯು

ಉತ್ತರಪ್ರದೇಶದಲ್ಲಿದೆ. ಇಂಗ್ಲಿಷ್ ಭಾಷೆಯಲ್ಲೂ ಇದೇ ರೀತಿಯ ಉದಾಹರಣೆಯನ್ನು ನೋಡುವುದಾದರೆ, 'ವಿಲನ್'' (villain) ಎಂಬ ಪದದ ಪ್ರಯೋಗವನ್ನು ಖಳನಾಯಕನಿಗಾಗಿ ಮಾಡಲಾಗುತ್ತದೆ ಮತ್ತು ಇಂಗ್ಲಿಷ್ ಜಮೀನುದಾರರು ಇಲ್ಲವೇ ದೊಡ್ಡ ದೊಡ್ಡ ಭೂಮಾಲೀಕರ ಬಳಿ ಕೆಲಸ ಮಾಡುತ್ತಿದ್ದ ಗುಲಾಮರಿಗೂ ಕೂಡ 'ವಿಲನ್'' ಎಂದು ಕರೆಯಲಾಗುತ್ತಿತ್ತು. ಪದಕೋಶದ ಆ ಸವಾಲುಗಳ ವಿಷಯಯದಲ್ಲಿ ಇವು ಕೇವಲ ಎರಡು ಉದಾಹರಣೆಗಳಷ್ಟೇ. ಭಾಷೆಯ ಸಂದರ್ಭದಲ್ಲಿ ಅದರ ವಿಭಿನ್ನವಾದ ಅಂಶಗಳು ಅಥವಾ ಅವುಗಳ ಪರಸ್ಪರ ಸಂಬಂಧಗಳಿಗೆ ಸಂಬಂಧಿಸಿದ ಇನ್ನೂ ಅನೇಕ ಸವಾಲುಗಳ ಬಗ್ಗೆ ವಿಚಾರ ಮಾಡುವ ಅವಶ್ಯಕತೆಯು ಸಾಕಷ್ಟಿದೆ.

ಈ ಲೇಖನದಲ್ಲಿ ನಾವು ಭಾಷೆಯ ಉತ್ಪತ್ತಿಗೆ ಕಾರಣವಾಗಿರುವ ಸಂಭಾವ್ಯ ಕಾರಣಗಳ ಅಥವಾ ವಿಧಾನಗಳ ಕುರಿತು ವಿಸ್ತೃತ ರೂಪದಲ್ಲಿ ನೋಡಲಿದ್ದೇವೆ. ನಾವಿಂದು ಬಹಳಷ್ಟು ಅಭಿವೃದ್ಧಿ ಹೊಂದಿರುವ ಭಾಷೆಯನ್ನು ಬಳಕೆ ಮಾಡುತ್ತಿರುವ ಹಿನ್ನೆಲೆಯಲ್ಲಿ, ಯಾವುದೇ ಭಾಷೆ ಇಲ್ಲದ ಅದೊಂದು ಕಾಲವಿದ್ದಿರಬಹುದು ಎಂಬುದನ್ನು ಕಲ್ಪನೆ ಮಾಡಿಕೊಳ್ಳಲೂ ಕೂಡ ಇಂದು ನಮಗೆ ಕಷ್ಟವಾದೀತು. ಮಾನವನಿಗೆ ಭಾಷೆಯನ್ನು ವಿಕಾಸಗೊಳಿಸುವ ಅನಿವಾರ್ಯತೆಗೆ ಕಾರಣವಾದ ಪರಿಸ್ಥಿತಿಗಳಾದರೂ ಏನಿದ್ದವು? ಈ ವಿಷಯವನ್ನು ಅರ್ಥಮಾಡಿಕೊಳ್ಳಲು ಪ್ರಾಣಿಗಳ ನಡವಳಿಕೆಯನ್ನು ನಾವು ಗಮನವಿಟ್ಟು ಪರಿಶೀಲನೆ ಮಾಡಿದಾಗ ಸರಿಯಾದ ಮಾರ್ಗದರ್ಶನ ದೊರಕೀತು. ಅವು ಎಂಥ ಸಂದರ್ಭದಲ್ಲಿ ಹಾಗೂ ಯಾವ ಬಗೆಯ ಧ್ವನಿಯನ್ನು ಹೊರಹೊಮ್ಮಿಸುತ್ತವೆ? ಮನುಷ್ಯನ ಭಾಷೆ (ಮಾತು) ಮತ್ತು ಪ್ರಾಣಿಗಳ ಧ್ವನಿಯಲ್ಲಿ ಇರುವಂಥ ಸಮಾನತೆಗಳೇನು ಅಥವಾ ವ್ಯತ್ಯಾಸಗಳೇನು? ಮಾನವನು ಕೂಡ ಪ್ರಾಣಿಗಳ ರೀತಿಯಲ್ಲೇ ಯಾವತ್ತಾದರೂ ಧ್ವನಿಯನ್ನು ಹೊರಡಿಸಲು ಸಾಧ್ಯವಾಗುತ್ತಿದ್ದಿರಬಹುದೇ? ಮಾನವ ಕುಲದ ಪ್ರಾಕೃತಿಕ ಬೆಳವಣಿಗೆಯ ಜೊತೆಜೊತೆಗೆ ಆತನ ಭಾಷೆಯೂ ಕೂಡ ವಿಕಾಸಗೊಂಡಿರಬಹುದೇ? ಅನಾದಿಕಾಲದಿಂದ ಹಿಡಿದು ಇಲ್ಲಿಯವರೆಗೂ ಮಾನವ ಸಮಾಜದ ವಿಕಾಸದ ಜೊತೆಜೊತೆಗೆ ಮನುಷ್ಯನ ಭಾಷೆಯೂ ಕೂಡ ಹೇಗೆ ಬೆಳವಣಿಗೆ ಕಂಡಿರಬಹುದು? ಇವೆರಡರ ನಡುವೆ ಯಾವುದಾದರೂ ಸಂಬಂಧವಿರಬಹುದೇ? ಭಾಷೆಯು ಬದಲಾವಣೆ ಆಗುತ್ತದೆ ಎನ್ನುವುದಾದರೆ ಅದು ಯಾವ ಕಾರಣಗಳಿಂದ ಇರಬಹುದು?

ಇಂದು ಮನುಷ್ಯನ ಭಾಷೆಯು ಬೇರೆ ಇನ್ಯಾವುದೇ ಪ್ರಾಣಿಪಕ್ಷಿಗಳ ಭಾಷೆಗಿಂತ ತುಂಬ ವಿಭಿನ್ನವಾಗಿದೆ ಅಥವಾ ತುಂಬ ಸಶಕ್ತವಾಗಿದೆ. ಅದರಲ್ಲಿ ಅಂತ್ಯವೇ ಕಾಣದಷ್ಟು ಉತ್ಪತ್ತಿ ಅಥವಾ ಸೃಷ್ಟಿ ಆಗಲು ಸಾಧ್ಯವಿದೆ. ಅದರಲ್ಲಿ ವೈಚಾರಿಕ ಕಲ್ಪನೆಗಳನ್ನು ಗಟ್ಟಿಗೊಳಿಸಬಹುದು ಇಲ್ಲವೇ ನಿಯಮಬದ್ಧಗೊಳಿಸಬಹುದು. ಬೇರೆ ಬೇರೆ ಭಾಷೆಗಳಲ್ಲಿ ವಿಭಿನ್ನವಾದ ಬಗೆಗಳಲ್ಲಿ ವಿಚಾರ ಮಂಥನವನ್ನು ಮಾಡಬಹುದಾಗಿದೆ ಹಾಗೂ ಈ ವಿಚಾರ ಮಂಥನದ ವ್ಯಾಪ್ತಿ ಅಥವಾ ಸ್ವರೂಪವು ಅಲ್ಲಿನ ಜನರು ಮತ್ತು ಆ ಸಮಯದ ಪರಿಸ್ಥಿತಿಗಳಿಂದ ಪ್ರಭಾವಿತವಾಗಬಹುದಾಗಿದೆ. ಬೇರೆ ಬೇರೆ ಸ್ಥಳಗಳಲ್ಲಿ ಹಾಗೂ ಅದರಲ್ಲೂ ಬೇರೆ ಬೇರೆ ಸಮಯಗಳಲ್ಲಿ ಭಾಷೆಗಳ ಸ್ವರೂಪದ ಮೇಲೆ ಅದರ ಪ್ರಭಾವ ಉಂಟಾಗುತ್ತಿರುತ್ತದೆ. ಅದು ಬೇಟೆಯಾಗಿರಬಹುದು ಅಥವಾ ಗುಂಪಿನ ರಕ್ಷಣೆ ಆಗಿರಬಹುದು, ಪರಸ್ಪರರ ಉದ್ದೇಶಗಳು, ಕೆಲಸ ಮಾಡುವ ರೀತಿ, ಅಪೇಕ್ಷೆಗಳು ಅಥವಾ ಸಾಮರ್ಥ್ಯವನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ಮಂದಿ ಒಟ್ಟಾಗಿ ಕೆಲಸ ಮಾಡುವಾಗ ಅವರ ನಡುವೆ ಪರಸ್ಪರ ಕೊಡುಕೊಳ್ಳುವಿಕೆಯ ಅವಶ್ಯಕತೆ ಬರಬಹುದು ಮತ್ತು ಅಂಥ ಸಮಯವೂ ಬರಬಹುದು, ಆಗೆಲ್ಲಾ ಭಾಷೆಯ ಬೆಳವಣಿಗೆಯೂ ಆಗಿರಬಹುದು ಎಂದು ಹೇಳಬಹುದಾಗಿದೆ. ಯಾವುದೇ ಸಾಮೂಹಿಕ ಪ್ರಯತ್ನಗಳಲ್ಲಿ ಪರಸ್ಪರರ ಪಾತ್ರವನ್ನು ಅರ್ಥೈಸಿಕೊಂಡು ಇಲ್ಲವೇ ಪರಸ್ಪರ ಸಂಜ್ಞೆಗಳ ವಿನಿಮಯದ ಮೂಲಕ ಯಾವುದೇ ಕಾರ್ಯಯೋಜನೆಯನ್ನು ವಾಸ್ತವಿಕ ಅಥವಾ ಪರಿವರ್ತನಶೀಲ ರೂಪದಲ್ಲಿ ಅನುಷ್ಠಾನಕ್ಕೆ ತರಬಹುದಾಗಿದೆ. ಒಟ್ಟೊಟ್ಟಿಗೆ ಕೆಲಸ ಮಾಡುವುದು, ಪರಸ್ಪರರ ಜೊತೆಗೆ ಇರುವುದು, ಒಬ್ಬರಿಗೊಬ್ಬರ ಸಂಜ್ಞೆಗಳನ್ನು ಗುರುತಿಸುವುದು ಇತ್ಯಾದಿಗಳ ಆರಂಭವು ಹೇಗೆ ಆಗಿರಬಹುದು ಮತ್ತು ಅದು ಹೇಗೆ ಇಷ್ಟೊಂದು ಬೆಳವಣಿಗೆ ಅಥವಾ ವಿಸ್ತಾರವಾಯಿತು ಎಂಬುದೇ ಇಲ್ಲಿರುವ ಪ್ರಶ್ನೆಯಾಗಿದೆ. ಇದಲ್ಲದೆ, ಆರಂಭಿಕ ಸಂವಾದದ ಸಂಜ್ಞೆಗಳಲ್ಲಿ ಏನೇನು ಬೆಳವಣಿಗೆ ಇಲ್ಲವೇ ಪರಿವರ್ತನೆ ಆಗಿದೆ, ಅಲ್ಲದೆ ಮುಂದೆ ಇನ್ನೇನು ಆಗಬಹುದು ಅಥವಾ ಈಗ ಅದು ಮನುಷ್ಯನ ವರ್ಣತಂತುವಿನ ಒಂದು ಅಂಗವೇ ಆಗಿರಬಹುದಾಗಿದೆ

ಅಥವಾ ಬೇರೆ ಸಂಯೋಜನೆಗಳ ಹಾಗೆ ಸ್ವಯಂ ಅಭಿವೃದ್ಧಿಯಾಗುವ ಕಾರಣದ ಶ್ರೇಣಿಯಲ್ಲೇ ಇದರಲ್ಲೂ ವಿಕಾಸ ಆಗಿರಬಹುದೇ ಎಂಬುದು ಕೂಡ ಇನ್ನೊಂದು ಪ್ರಶ್ನೆಯಾಗಿದೆ. ಇದು ಕ್ರಮೇಣ ಬೆಳವಣಿಗೆಯ ಆಧಾರದಿಂದ ರೂಪುಗೊಂಡ ತಿಳಿವಳಿಕೆ ಆಗಿದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಬಗೆಯ ಪರಿಕಲ್ಪನೆಗಳಿವೆ. ಇದೀಗ ನಮ್ಮ ಮುಂದೆ ಏನಿದೆಯೋ ಅದು ಯಾವಾಗಲೂ ಹಾಗೆಯೇ ಇತ್ತು ಮತ್ತು ಇರುತ್ತದೆ ಎಂಬುದು ಅವುಗಳಲ್ಲಿನ ಇರುವ ಒಂದು ಪರಿಕಲ್ಪನೆಯಾಗಿದೆ. ಮಾನವ ಸಮಾಜ ಮತ್ತು ಸ್ವಯಂ ಮನುಷ್ಯನು ಹೇಗೆ ಸೃಷ್ಟಿಯಾದ? ಏಕೆ ಸೃಷ್ಟಿಯಾದ? ಎಂಬಿತ್ಯಾದಿ ಪ್ರಶ್ನೆಗಳಿಗೆ ಈ ಪರಿಗಣನೆಯಲ್ಲಿ ಯಾವುದೇ ಸ್ಥಾನ ಇರುವುದಿಲ್ಲ. ಮಾನವನನ್ನು ಸರ್ವಶಕ್ತನಾದ ದೇವರು ಸೃಷ್ಟಿ ಮಾಡಿರುವನು ಮತ್ತು ಅದೇ ದೇವರು ಸಂತೃಪ್ತನಾಗಿ ಮನುಷ್ಯನಿಗೆ ಜ್ಞಾನದ ವರವನ್ನು ನೀಡಿರುವನು ಎಂಬಂತಹ ಇನ್ನೂ ಕೆಲವು ಕಲ್ಪನೆಗಳೂ ಇವೆ. ಅದರ ಪ್ರಕಾರ, ಏನಿದೆಯೋ ಅದೆಲ್ಲವೂ ದೇವರ ಕೊಡುಗೆ ಆಗಿದೆ. ಯಾವುದೋ ವ್ಯಕ್ತಿಯ ಮೂಲಕ ಕಲಿಸಲಾದ ಕೌಶಲ್ಯವನ್ನು ದೈವ ಕೃಪೆ ಅಥವಾ ದೈವೀ ಶಕ್ತಿ ಎಂಬ ಗ್ರಹಿಕೆಯನ್ನು ಆರೋಪಿಸಲಾಗಿದೆ ಎನ್ನುವ ಮೂಲಕ ಪ್ರಾಚೀನ ಕತೆಗಳು ಸಂದೇಹಕ್ಕೂ ಆಸ್ಪದ ನೀಡಿವೆ. ಸಾಧನೆಗೆ ಸದಾ ಆಧ್ಯಾತ್ಮಿಕ ಸ್ವರೂಪವನ್ನು ನೀಡಿ ಪ್ರಸ್ತುತಪಡಿಸಲಾಗಿದೆ, ಔಷಧಕ್ಕೆ ಸಂಬಂಧಿಸಿದ ಜ್ಞಾನದ ಸಾಮರ್ಥ್ಯವು ಅಶ್ವಿನಿ ಕುಮಾರರ ವರದಾನ ಎಂಬ ಹೆಸರಿಸಲಾಗಿದೆ. ಇದೇ ರೀತಿ ಭಾಷೆ ಅಥವಾ ಅದರ ಉಪಯೋಗಗಳನ್ನು ಸರಸ್ವತಿಯ ವರದಾನ ಎನ್ನಲಾಗಿದೆ. ಭಾಷೆಯ ಕುರಿತು ಇದೇ ತರಹದ ಇನ್ನೂ ಅನೇಕ ಕಲ್ಪನೆಗಳಿವೆ. ಈ ಪರಿಕಲ್ಪನೆಗಳಲ್ಲಿ ಭಾಷೆಗಳ ಬೆಳವಣಿಗೆಯ ಜತೆಜತೆಗೆ ಅವುಗಳು ಒಂದು ಇನ್ನೊಂದರ ಸಮಕ್ಷಮದಲ್ಲಿ ಹೊಂದಿರುವ ಪ್ರತಿಷ್ಠೆ ಅಥವಾ ದಕ್ಷತೆ ಇವೆರಡರ ಕುರಿತು ಎಂಥ ಊಹೆಗಳು ಮಿಳಿತವಾಗಿದೆಯೆಂದರೆ, ಅವು ಭಾಷೆಗಳು ಮೂಲಭೂತವಾಗಿ ಪರಸ್ಪರ ಸಮಾನ ಅಲ್ಲ ಎಂದು ಪರಿಗಣಿಸುತ್ತವೆ.

ಆದರೆ ನಾವು ಒಂದು ವೇಳೆ ಇತಿಹಾಸದೊಳಗೆ ಇಣುಕಿ ನೋಡಿದರೆ ನಾವಿಂದು ಏನೆಲ್ಲವನ್ನೂ ನೋಡುತ್ತಿದ್ದೇವೋ ಅದೆಲ್ಲವೂ ಈಗಿದ್ದ ಹಾಗೇ ಇರಲಿಲ್ಲ ಮತ್ತು ಅವೆಲ್ಲವೂ ಭಗವಂತನ ಕೃಪೆಯಿಂದ ದಿಢೀರ್ ಆಗಿ ಎಲ್ಲವೂ ರೂಪುಗೊಂಡಿದ್ದೂ ಅಲ್ಲ ಎನ್ನುವುದು ಅರಿವಿಗೆ ಬರುತ್ತದೆ. ಹಾಗೂ ಯಾರೋ ಒಬ್ಬ ಅದ್ಯಾವುದೋ ಸಿದ್ಧಿಯಿಂದ ಪ್ರಾಪ್ತಿ ಮಾಡಿಕೊಂಡ ಅಥವಾ ಕಂಡುಹಿಡಿದ ಎಂದು ಬಣ್ಣಿಸಲು ಇದು ಒಬ್ಬನೇ ವ್ಯಕ್ತಿಯ ಸಾಮರ್ಥ್ಯ ಅಥವಾ ಶೌರ್ಯದ ವಿಚಾರವೂ ಅಲ್ಲ. ಅದೇನಿದ್ದರೂ ಮನುಷ್ಯರು ಏನು ಮಾಡಿದ್ದಾರೋ ಅದನ್ನು ತಮ್ಮ ಸಾಮೂಹಿಕ ಪ್ರಯತ್ನ ಹಾಗೂ ಶ್ರಮದಿಂದ ಮಾಡಿದ್ದಾರೆ ಅನ್ನಿಸುತ್ತದೆ. ತಮ್ಮ ಮುಖ್ಯ ಅವಶ್ಯಕತೆಗಳನ್ನು ಪೂರ್ಣಗೊಳಿಸುವ ಸಲುವಾಗಿ ಮಾಡಿದ್ದಾರೆ. ಭಾಷೆಯ ಬೆಳವಣಿಗೆಯು ಮನುಷ್ಯ ಅಥವಾ ಪ್ರಕೃತಿಯ ಪರಸ್ಪರ ಸಂಬಂಧಗಳು ಅಥವಾ ಸಾಮಾಜಿಕ ಬೆಳವಣಿಗೆಯ ಕಾರಣದಿಂದಲೇ ಆಗಿರುವಂಥದ್ದು. ಮನುಷ್ಯನು ಪರಿಶ್ರಮದ ಸಹಕರಿಸುವ ಸಮಯದಲ್ಲಿ ಒಬ್ಬರಿಗೊಬ್ಬರ ಸಂವಹನದ ಅಗತ್ಯತೆಯನ್ನು ಅರಿತುಕೊಂಡರು ಎಂಬುದು ಇದರಿಂದ ಹೊರಹೊಮ್ಮುವ ಇನ್ನೊಂದು ಪರಿಕಲ್ಪನೆಯಾಗಿದೆ. ಪ್ರಾಕೃತಿಕ ಸಂದರ್ಭಗಳಲ್ಲಿ ಮನುಷ್ಯನು ಅತ್ಯಂತ ಶಕ್ತಿಶಾಲಿ ಆಗಿರಲಿಲ್ಲ ಮತ್ತು ಇದಲ್ಲದೆ ಆತನ ಬಳಿ ಪಾರಾಗಲು ಯಾವುದೇ ಸಂಪನ್ಮೂಲವೂ ಇರಲಿಲ್ಲ. ಆತ ಅತ್ಯಂತ ವೇಗವಾಗಿ ಓಡಬಲ್ಲವನಾಗಿರಲಿಲ್ಲ ಮತ್ತು ಕೆಲವು ಪ್ರಾಣಿಗಳ ಹಾಗೆ ಮರವನ್ನು ಏರಿ ವಾಸಿಸಬಲ್ಲವನೂ ಆಗಿರಲಿಲ್ಲ. ಆತನ ದೇಹ ಪ್ರಕೃತಿಯ ರಚನೆಯು ಸಮತಟ್ಟಾದ ಭೂಪ್ರದೇಶದಲ್ಲಿ ವಾಸ ಮಾಡಲು ಉಪಯುಕ್ತವಾಗಿತ್ತಷ್ಟೇ. ಹೀಗಾಗಿ ಮಾನವರಿಗೆ ತಮ್ಮ ಸಂರಕ್ಷಣೆಗಾಗಿ ಪರಸ್ಪರರ ಸಹಕಾರದ ಅತ್ಯಂತ ಅಗತ್ಯತೆ ಇತ್ತು. ಒಬ್ಬಂಟಿಯಾಗಿ ಅಸ್ತಿತ್ವ ಕಾಪಾಡಿಕೊಳ್ಳುವುದು ಆತನಿಗೆ ಕಷ್ಟಕರವಾಗಿತ್ತು (ಕೆಲವು ಪ್ರಾಣಿಗಳು ಕೂಡ ಬೇರೆ ಬೇರೆ ವಿಧದ ಸಮೂಹ ಅಥವಾ ಗುಂಪುಗಳಲ್ಲಿ ವಾಸಿಸುತ್ತ ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತವೆ). ಆದರೆ ಮನುಷ್ಯನ ಮೆದುಳು ಎಷ್ಟೊಂದು ವಿಕಾಸಗೊಂಡಿತ್ತು ಎಂದರೆ, ಆತನ ಬಳಿ ಅದರ ಉಪಯೋಗಕ್ಕಾಗಿ ಬಹಳಷ್ಟು ಸಾಧ್ಯತೆಗಳಿದ್ದವು. ಜತೆಗೆ ಮನುಷ್ಯನ ಕೈಗಳಲ್ಲಿರುವ ಬೆರಳುಗಳು ಸ್ವತಂತ್ರವಾಗಿ ಚಲಿಸಬಹುದಾದ ಕಾರಣದಿಂದ ಕೈಗಳ ಉಪಯೋಗದ ಬಹಳಷ್ಟು ಸಾಧ್ಯತೆಗಳು ಮುನ್ನೆಲೆಗೆ ಬಂದವು, ಆದರೆ ಪ್ರಾಣಿಗಳಿಗೆ ಇವು ಲಭ್ಯವಿರಲಿಲ್ಲ. ನಿಸರ್ಗದತ್ತವಾಗಿ ಸಿಗುವ ವಸ್ತುಗಳನ್ನು ಆಯುಧಗಳ ರೂಪದಲ್ಲಿ ಬಳಕೆ ಮಾಡುವುದಲ್ಲದೆ, ಪ್ರಕೃತಿಯಲ್ಲಿ

ಲಭ್ಯವಿರುವ ಸಾಮಗ್ರಿಗಳು ಅಥವಾ ಸಾಧನಗಳಿಂದ ಸ್ವತಃ ಆಯುಧಗಳನ್ನು ತಯಾರಿಸುವುದು ಕೂಡ ಮನುಷ್ಯನಿಗೆ ಸಿದ್ಧಿಸಿತ್ತು. ಕೆಲವು ಪ್ರಾಣಿಗಳು ಪ್ರಕೃತಿಯಲ್ಲಿ ಲಭ್ಯವಿರುವ ವಸ್ತುಗಳನ್ನು ಆಯುಧಗಳ ರೀತಿಯಲ್ಲಿ ಬಳಕೆ ಮಾಡುತ್ತವೆ ಎಂದು ಪರಿಗಣಿಸಬಹುದಾದರೂ, ಆಯುಧಗಳನ್ನು ತಯಾರಿಸಲು ಅವುಗಳಿಗೆ ಸಾಧ್ಯವಿಲ್ಲ ಹಾಗೂ ಅವುಗಳಿಗೆ ಅದರ ಬಹಳ ಅವಶ್ಯಕತೆಯು ಅವುಗಳಿಗೆ ಬರುವುದಿಲ್ಲ. ಕಾರಣ, ಅವುಗಳ ಬಳಿ ಹಲ್ಲುಗಳು, ಪಂಜಗಳಂಥ ಜೀವಂತ ಆಯುಧಗಳಿರುತ್ತವೆ. ಇದಲ್ಲದೆ ಹಲ್ಲುಗಳು, ಪಂಜಗಳ ಉಪಯೋಗವನ್ನು ತಮ್ಮ ಮರಿಗಳಿಗೆ ಕಲಿಸಿಕೊಡಬೇಕಾದ ಅವಶ್ಯಕತೆಯೂ ಪ್ರಾಣಿಗಳಿಗೆ ಬರುವುದಿಲ್ಲ, ಏಕೆಂದರೆ ಅವು ನೋಡಿ ನೋಡಿಯೇ ಅದನ್ನೆಲ್ಲ ಕಲಿತುಕೊಂಡುಬಿಡುತ್ತವೆ. ಇದೇ ಕಾರಣದಿಂದ ಪ್ರಾಣಿಗಳಿಗೆ ಮಾತನಾಡುವುದನ್ನು ಕಲಿತುಕೊಳ್ಳುವ ಅಗತ್ಯತೆಯೇ ಬರುವುದಿಲ್ಲ. ಆದರೆ ಮನುಷ್ಯನಿಗೆ ಹಾಗಲ್ಲ, ಆತ ಇನ್ನೊಬ್ಬ ಮನುಷ್ಯನಿಗೆ ಅಥವಾ ತಮ್ಮದೇ ಮಕ್ಕಳಿಗೆ ಆಯುಧಗಳನ್ನು ತಯಾರಿಸುವುದನ್ನು ಕಲಿಸಿಕೊಡುವುದು ಬಹಳ ಅವಶ್ಯಕವಿತ್ತು ಮತ್ತು ಅದರ ಬಳಕೆಯನ್ನು ತಿಳಿಸಿಕೊಡುವುದೂ ಅನಿವಾರ್ಯವಾಗಿತ್ತು. ಈ ಅನಿವಾರ್ಯತೆಯೂ ಕೂಡ ಅತನಿಗೆ ಭಾಷೆಯ ಬೆಳವಣಿಗಾಗಿ ಸಹಾಯ ಮಾಡಿತ್ತು. ಇದಲ್ಲದೆ, ಭಾಷೆಗಳು ಸಾಮರ್ಥ್ಯದಲ್ಲಿ ಹೇಗೆ ಸಮಾನ ಸಾಧ್ಯತೆಗಳನ್ನು ಹೊಂದಿರುತ್ತವೆ ಎನ್ನುವುದರ ಬಗ್ಗೆ ಕೂಡ ಸಾಕಷ್ಟು ವ್ಯಾಖ್ಯಾನಗಳನ್ನು ಮಾಡಲಾಗಿದೆ.

ನಾವು ಈ ಕಿರುಲೇಖನದಲ್ಲಿ ಮಾನವನ ಭಾಷೆಯ ಆರಂಭವು ಹೇಗಾಗಿರಬಹುದು ಎಂಬ ವಿಷಯದ ಬಗ್ಗೆ ಮಾತ್ರ ಚರ್ಚೆಯನ್ನು ಮಾಡಿದ್ದೇವೆ. ಏಕೆಂದರೆ ಮಾನವನ ಭಾಷೆಯ ಸಾಮರ್ಥ್ಯಕ್ಕೂ ಉಳಿದ ಪ್ರಾಣಿಗಳ ಸಾಮರ್ಥ್ಯಕ್ಕೂ ಅಜಗಜಾಂತರವಿದ್ದು, ಇದೇ ಕಾರಣದಿಂದ ಈ ಸಾಮರ್ಥ್ಯದ ಬೆಳವಣಿಗೆಯನ್ನು ಅರಿತುಕೊಳ್ಳುವುದು ಒಂದು ಕುತೂಹಲಕಾರಿ ಸಂಗತಿಯಾಗಿದೆ. ಅಷ್ಟಾದರೂ ನಾವು ಹೇಳಿದಂತೆ ಯಾರು ಇದನ್ನು ದೇವರ ಸೃಷ್ಟಿ ಅಥವಾ ದೇವರಿಂದ ಪ್ರದಾನವಾಗಿರುವಂಥದ್ದು ಎಂದು ಭಾವಿಸುವರೋ ಅವರಿಗೆ ಇದು ಮತ್ತು ಜೈವಿಕ ವಿಕಾಸದ ಇನ್ನಿತರ ವಿಷಯಗಳು ಪ್ರಮುಖ ಎನಿಸುವುದಿಲ್ಲ. ಆದರೆ ಈ ಪ್ರಶ್ನೆಯ ಪ್ರಕೃತಿ ಆಧಾರಿತವಾದ ಉತ್ತರವನ್ನು ಹುಡುಕಲು ಅನೇಕ ಅಂಶಗಳ ಬಗ್ಗೆ ಇಲ್ಲಿ ವಿಚಾರ ಮಂಥನ ಮಾಡಲಾಗಿದೆ. ಈ ಸಾಮರ್ಥ್ಯವು ಜೈವಿಕವಾಗಿರುವಂಥದ್ದೇ, ಅಥವಾ ಮನುಷ್ಯನ ವರ್ಣತಂತುಗಳ ವಿಕಾಸದ ಕಾರಣದಿಂದ ಅಸ್ತಿತ್ವಕ್ಕೆ ಬಂದಿದೆಯೇ, ಅಥವಾ ಇದು ಮನುಷ್ಯನ ಸಾಮಾಜಿಕ ಪರಸ್ಪರ ಕ್ರಿಯೆಯ ಫಲಿತಾಂಶವೇ, ಅಥವಾ ಮನುಷ್ಯನ ಈ ಸಾಮಾಜಿಕ ಪರಸ್ಪರ ಕ್ರಿಯೆಯ ಅವಶ್ಯಕತೆಗನುಗುಣವಾದ ಮನುಷ್ಯನ ಜೈವಿಕ ವಿಕಾಸದ ಕಾರಣವೇ ಎಂಬುದು ಇಲ್ಲಿನ ಮಹತ್ವಪೂರ್ಣ ಪ್ರಶ್ನೆಯಾಗಿದೆ.

***